ಡಾ|| ಟಿ. ದಯಾನಂದ ಪಟೇಲ್*

# ಹೊಯ್ಸಳರ ಕಾಲದ ಅಳತೆಗೋಲು-ಶಾಸನ ಟಿಪ್ಪಣಿ

ಕ್ರಿ. ಶ. ೧೧ನೇ ಶತಮಾನದಿಂದ ಪ್ರಾರಂಭವಾಗಿ ೧೪ನೇ ಶತಮಾನದ ಮಧ್ಯಭಾಗದವರೆಗಿನ ಹೊಯ್ಸಳರ ಕಾಲದ ಭೂಮಾಪನಗಳ ಇತಿಹಾಸವನ್ನು ತಿಳಿಯಲು ಆ ಕಾಲದ ಶಾಸನಗಳು ನಮಗೆ ಅನೇಕ ಮಾಹಿತಿಗಳನ್ನು ಒದಗಿಸುತ್ತವೆ. ಇವರ ಕಾಲದಲ್ಲೂ ಕೂಡ ಭೂಕಂದಾಯ ಅಥವಾ ತೆರಿಗೆಯನ್ನು ಕಟ್ಟಲೂ ಅನೇಕ ತರಹದ ಭೂಮಾಪನಗಳನ್ನು ಉಪಯೋಗಿಸುತ್ತಿದ್ದರೆಂದು ಹಲವಾರು ಶಾಸನಗಳು ಉಲ್ಲೇಖಿಸಿವೆ. ಭೂಮಿಯನ್ನು ಅಳತೆಮಾಡಿ ಇಷ್ಟು ಕಂಬಗಳಿವೆ ಎಂದು ಭೂಮಾಪನ ಮಾಡುತ್ತಿದ್ದರು. ಭೂಮಾಪನವನ್ನು ಮಾಡಲು ಅನೇಕ ತರಹದ ಅಳತೆಗೋಲುಗಳನ್ನು ಉಪಯೋಗಿಸುತ್ತಿದ್ದರೆಂದು ಮತ್ತು ಭೂಮಿಯನ್ನು ಅಳೆಯಲು ಸ್ವಲ್ಪ ಹಣವನ್ನು ಕೂಡ ಕಟ್ಟಬೇಕಾಗುತ್ತಿತ್ತು ಎಂದು ಶಾಸನಗಳಿಂದ ತಿಳಿದು ಬರುತ್ತದೆ.[1] ಹೊಯ್ಸಳರ ಕಾಲದಲ್ಲಿ ಭೂಮಾಪನ ಲೆಕ್ಕಾಚಾರ ಮಾಡಲು ಅವುಗಳನ್ನು ಕಂಭ, ನಿವರ್ತನ ಮತ್ತರ್ ಎಂಬ ಹೆಸರುಗಳಿಂದ ಕರೆಯುತ್ತಿದ್ದರು.[2] ಈ ಭೂಮಾಪನ ಅಳತೆಗೋಲುಗಳ ಉದ್ದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆಯಾಗಿರುತ್ತಿತ್ತು ಮತ್ತು ಅವುಗಳನ್ನು ಸಾಮಾನ್ಯವಾಗಿ ಹದಿನೆಂಟು ಮತ್ತು ಇಪ್ಪತ್ತಾರು ಮೆಟ್ಟುಗಳಲ್ಲಿ ಅಳೆಯುತ್ತಿದ್ದರು ಎಂಬುದನ್ನು ಕೂಡ ಶಾಸನಗಳು ಉಲ್ಲೇಖಿಸುತ್ತವೆ.[3] ಕೆಲವು ಶಾಸನಗಳಲ್ಲಿ ಭೂಮಿಯ ಅಳತೆಯನ್ನು ಅವುಗಳಲ್ಲಿ ಬೆಳೆಯುವ ಧಾನ್ಯದ ಪ್ರಮಾಣದಲ್ಲಿಯೂ ಕೂಡ ಅಂದರೆ ಒಂದು ಕೊಳಗ ಅಥವಾ ಖಂಡುಗ ಬಿತ್ತನೆ ಮಾಡುವ ಪ್ರದೇಶವೆಂದು ಕೂಡ ಉಲ್ಲೇಖಿತವಾಗಿವೆ.[4]

ಹೊಯ್ಸಳರ ಅರಸನಾದ ಸೋಮೇಶ್ವರನ ಕಾಲಕ್ಕೆ ಅಂದರೆ ಕ್ರಿ. ಶ. ೧೨೫೦ಕ್ಕೆ ಸೇರಿದ ಇದೊಂದು ವಿಶೇಷವಾದ ಶಾಸನದಲ್ಲಿ[5] ಹದಿನಾರು ಮೆಟ್ಟಿನ ಭೂಮಾಪನದ ಅಳತೆಗೆ ಸಂಬಂಧಪಟ್ಟ ವಿಚಾರವನ್ನು ಬೆಳಕಿಗೆ ತರುತ್ತದೆ. ಈ ಶಾಸನವು ಅರಕಲಗೂಡು ತಾಲ್ಲೋಕಿನ ರಾಮನಾಥಪುರದ ರಾಮೇಶ್ವರ ದೇವಸ್ಥಾನದ ಗರ್ಭಗೃಹದ ಹೊರಬಿತ್ತಿಯಲ್ಲಿ ದಕ್ಷಿಣಮೂರ್ತಿ ದೇವಸ್ಥಾನದ ಹಿಂದಿರುವ ನಾಲ್ಕು ಕಲ್ಲುಗಳ ಮೇಲೆ ಕೆತ್ತಲಾಗಿದೆ. ಈ ವಿಶೇಷವಾದ ಹದಿನಾರು ಮೆಟ್ಟಿನ ಭೂಮಾಪದ ಅಳತೆಗೋಲು ಬಗ್ಗೆ ಎಲ್ಲೂ ಕೂಡ ಉಲ್ಲೇಖನಗೊಂಡಿಲ್ಲದಿರುವುದೊಂದು ವಿಶೇಷ ಸಂಗತಿ.

ಹೊಯ್ಸಳರ ರಾಜನಾದ ಸೋಮೇಶ್ವರನ ಕಾಲದಲ್ಲಿ ಇವನ ದಂಡನಾಯಕ ಸಂಧಿವಿಗ್ರಹಿ ಬೊಮ್ಮಣ್ಣನ ಕೆಳಗೆ ಕೆಲಸ ಮಾಡುತ್ತಿದ್ದ ಕಶ್ಯಪ

---

* ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮಾನಸ ಗಂಗೋತ್ರಿ, ಮೈಸೂರು ೫೭೦ ೦೦೬

1 ಎ. ಕ. ಸಂ. ೫, ಬೇಲೂರು ೮೬

2 ಅದೇ, ಬೇಲೂರು ೮೬

3 ಅದೇ, ಸಂ. ೭, ಸಿನ್ ? ೨೧

4 ಟಿ. ವಿ. ಮಹಲಿಂಗಮ್ ಸೌತ್ ಇಂಡಿಯನ್ ಪಾಲಿಟಿ, ಪು. ೧೫೩

5 ಎ. ಕ. ಸಂ. ೮ (ಪರಿಷ್ಕೃತ ಆವೃತ್ತಿ) ಅರಕಲಗೂಡು-೪೬

ಗೋತ್ರಕ್ಕೆ ಸೇರಿದ ವಾಮರಸನ ಮಗ ಕಲ್ಲಯ್ಯ ಕೊಟ್ಟ ಒಂದು ಹೂದೋಟದ ದಾನವನ್ನು ಈ ಶಾಸನ ಬಹಳ ನಿಖರತೆಯಿಂದ ಭೂಮಾಪನ ವಿಶೇಷತೆ ಬಗೆಗೆ ಉಲ್ಲೇಖಿಸುತ್ತದೆ ಮತ್ತು ಅನೇಕ ವಿಚಾರಗಳನ್ನು ಬೆಳಕಿಗೆ ತರುತ್ತದೆ.

(ಅ) ಈ ಶಾಸನದಲ್ಲಿ ಹೂದೋಟವನ್ನು ಅಳೆಯಲು ನಿಖರವಾದ ಭೂಮಾಪನ ಅಳತೆಗೋಲಿನ ಉಲ್ಲೇಖವಿದೆ.

(ಆ) ಈ ಭೂಮಾಪನ ಅಳತೆಗೋಲು ಹದಿನಾರು ಮೆಟ್ಟಿನ ಅಳತೆಗೋಲಾಗಿವೆ.

(ಇ) ಈ ಹೂದೋಟವು ದೀರ್ಘಚತುರಸ್ರಾಕಾರದ ಆಕೃತಿ ಅಂದರೆ ಉತ್ತರ ದಕ್ಷಿಣವಾಗಿ ಉದ್ದ ವಾಗಿಯೂ ಮತ್ತು ಪೂರ್ವ, ಪಶ್ಚಿಮ ಅಗಲ ವಾಗಿಯೂ ಇರತಕ್ಕಂತಹ ಹೂದೋಟ. ಇದರ ಒಟ್ಟು ವಿಸ್ತೀರ್ಣ ನೂರಐವತ್ತೆಂಟು ಅಳತೆಗೋಲು ಉಳ್ಳದ್ದಾಗಿದೆ.

(ಈ) ಇದು ಉತ್ತರಕ್ಕೆ ಮತ್ತು ದಕ್ಷಿಣಕ್ಕೆ ನಲವತ್ತೈದು ಅಳತೆಗೋಲು ಉಳ್ಳದ್ದಾಗಿದೆ ಪೂರ್ವ ಮತ್ತು ಪಶ್ಚಿಮಕ್ಕೆ ಮೂವತ್ತಾನ್ಲು ಅಳತೆಗೋಲು ಉಳ್ಳದ್ದಾಗಿದೆ.

(ಉ) ಇದೇ ಶಾಸನದಲ್ಲಿ ಇದನ್ನು ಕಂಬಗಳಲ್ಲಿ ತೊಂಬತ್ತೈದು ಕಂಬಗಳ ಭೂಪ್ರದೇಶ ಉಳ್ಳದ್ದೆಂದೂ ಉಲ್ಲೇಖಿತವಾಗಿದೆ.

(ಊ) ಈ ಶಾಸನದ ವಿಶೇಷವೆಂದರೆ ಈ ಹೂದೋಟದ ಪ್ರಮಾಣವನ್ನು ಒಂದು ಹದಿನಾರು ಮೆಟ್ಟಿನ ಅಳತೆಗೋಲಿನಿಂದ ಮತ್ತು ಕಂಬಗಳ ಭೂಪ್ರಮಾಣದಲ್ಲಿಯೂ ಉಲ್ಲೇಖಿತವಾಗಿರುವುದು. ಈ ಮೇಲಿನ ಕಾರಣಗಳಿಂದ ಈ ಶಾಸನವು ಭೂಮಾಪನ ಅಳತೆಯಲ್ಲಿ ಒಂದು ವಿಶೇಷತೆಯನ್ನು ಪಡೆದಿದೆ ಎಂದು ಉಲ್ಲೇಖಿಸಬಹುದು.